ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಕರ್ನಾಟಕ ಲೋಕ ಸೇವಾ ಆಯೋಗದ ಕಾರ್ಯವೈಖರಿಯಲ್ಲಿನ ಲೋಪದೋಷಗಳ ಬಗ್ಗೆ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) :-

795 (990) ಮಾನ್ಯ ಮುಖ್ಯಮಂತ್ರಿ ಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ಲೋಕ ಸೇವಾ ಆಯೋಗವು ಆಯ್ಕೆ ಪಟ್ಟಿ ಪ್ರಕಟಿಸಲು ಇರುವ ನಿಯಮಗಳ ವಿವರ ನೀಡುವುದು;

(ಆ) ಯಾವುದೇ ಹುದ್ದೆಗೆ ಆಯ್ಕೆ ಮಾಡಿದಾಗ ಅಂತಿಮ ಪಟ್ಟಿ ಪ್ರಕಟಿಸುವ ಮುನ್ನ ತಾತ್ಕಾಲಿಕ ಪಟ್ಟಿ ಪ್ರಕಟಿಸಲು ಇರುವ ನಿಯಮಗಳ ವಿವರ ನೀಡುವುದು;

(ಇ) ತಾತ್ಕಾಲಿಕ ಪಟ್ಟಿ ಪ್ರಕಟಿಸದೇ ಇದ್ದಲ್ಲಿ, ಪ್ರಾಮಾಣಿಕ ಅಭ್ಯರ್ಥಿಗಳಿಗೆ ಆಗುವ ತೊಂದರೆ ಮತ್ತು ಅನ್ಯಾಯವನ್ನು ಸರಿಪಡಿಸಿಕೊಳ್ಳಲು ಅವಕಾಶ ನಿರಾಕರಿಸಿದಂತೆ ಆಗುವುದಿಲ್ಲವೇ; (ವಿವರ ನೀಡುವುದು)

(ಈ) ತಾತ್ಕಾಲಿಕ ಪಟ್ಟಿ ಪ್ರಕಟಿಸದೇ ಎಷ್ಟು ಅಂತಿಮ ಮತ್ತು ಪರಿಷ್ಕøತ ಪಟ್ಟಿಗಳನ್ನು ಪ್ರಕಟಿಸಲಾಗಿದೆ; ಈ ಬಗ್ಗೆ ಕಳೆದ ಮೂರು ವರ್ಷದಲ್ಲಿ ಪ್ರಕಟಿಸಿದ್ದ ಪಟ್ಟಿಗಳ ಸಂಪೂರ್ಣ ವಿವರ ನೀಡುವುದು;

(ಉ) ದಿನಾಂಕ:22-08-2019ರಂದು ಪ್ರಕಟಿಸಿರುವ 1998 ಗೆಜೆಟೆಡ್ ಪ್ರೊಬೇಷನರ್‍ಗೆ ಸಂಬಂಧಿಸಿದಂತೆ ತಾತ್ಕಾಲಿಕ ಪಟ್ಟಿ ಪ್ರಕಟಿಸಿದ ದಿನಾಂಕದಿಂದ ಆಕ್ಷೇಪಣೆ ಸಲ್ಲಿಸಲು ಎಷ್ಟು ದಿನ ಕಾಲಾವಕಾಶ ನೀಡಲಾಗಿದೆ; (ವಿವರ ನೀಡುವುದು)

(ಊ) ತಾತ್ಕಾಲಿಕ ಪಟ್ಟಿ ಪ್ರಕಟಣೆ ಮಾಡದೇ ಇದ್ದಲ್ಲಿ, ನಿಯಮಗಳ ಉಲ್ಲಂಘನೆಯಾಗುವುದಿಲ್ಲವೆ; ಇದಕ್ಕೆ ಕಾರಣ ಕರ್ತರು ಯಾರು; ವಿವರ ನೀಡುವುದು;

(ಋ) ಆಕ್ಷೇಪಣೆಗಳಿಗೆ ಅವಕಾಶ ನೀಡದಿರುವುದರಿಂದ ಎಷ್ಟು ಅಭ್ಯರ್ಥಿಗಳು ಈ ಪಟ್ಟಿಯ ದೋಷಗಳಿಂದ ಕೆ.ಎ.ಟಿ, ಸಿ.ಎ.ಟಿ ಮತ್ತು ಉಚ್ಚ ನ್ಯಾಯಾಲಯದ ಮೊರೆ ಹೋಗಿದ್ದಾರೆ; ಈ ಪ್ರಕರಣದಲ್ಲಿ ಲೋಕ ಸೇವಾ ಆಯೋಗವನ್ನು ಪಾರ್ಟಿ ಮಾಡಲಾಗಿದೆಯೇ;(ವಿವರ ನೀಡುವುದು)

(ಎ) ನಿಯಮ ಉಲ್ಲಂಘಿಸಿದ ಸಿಬ್ಬಂದಿ ಮತ್ತು ಅಧಿಕಾರಿಗಳ ವಿರುದ್ಧ ಇದುವರೆವಿಗೂ ಸರ್ಕಾರ ಕೈಗೊಂಡಿರುವ ಕ್ರಮಗಳೇನು?(ವಿವರ ನೀಡುವುದು)